ಒಂದಾಣೆ ಮಾಲೆ 279

# ಜೀಮೂತವಾಹನ

(ಏಕಾಂಕ ನಾಟಕ)



ರಚಯಿತ:

**ಶ್ರೀ। ಡಿ. ಮಹಾಲಿಂಗ ಭಟ್ಟ, ವಿದ್ವಾನ್, ಎಡನಾಡು.**



**1960**

**ಬೆಲೆ: ೧ ಆಣೆ.**

---

ಒಂದಾಣೆ ಮಾಲೆ — ಮಂಗಳೂರು.

# ಎರಡು ಮಾತು

........

ಆರ್ಯರ ಉದ್ಬೋಧಕ ಕಥಾಸಾಗರದಲ್ಲಿ *ಜಿಮೂತ-ವಾಹನ"ನ ತ್ಯಾಗವನ್ನು ವಿಶದೀಕರಿಸುವ ಘಟನಾವಳಿಯು ಉಜ್ವಲ ರತ್ನದಂತಿದೆ. ಒಂದು ನಾಗವನ್ನು ಉಳಿಸಲೋಸುಗ ಜಿಮೂತ ವಾಹನನು ತನ್ನನ್ನೆ ಸಂತೋಷದಿಂದ ಅರ್ಪಿಸಿಕೊಂಡನು. ಸರ್ಪಗಳು ಕ್ರೂರವೆನಿಸಿದ್ದರೂ, ಅವುಗಳನ್ನು ಆರ್ಯರು ಹಿಂಸಿಸುವುದಿಲ್ಲ. 'ಕ್ಷೇತ್ರಪಾಲ' ಎಂದು ವರ್ಣಿತವಾಗಿರುವ ಈ ಜೀವಿಗಳನ್ನು ಹಿಂದೂ ಗಳೆಲ್ಲರೂ ಪೂಜಿಸುವುದರಲ್ಲಿ ಗೂಢಾರ್ಥವಿದೆ.

ಜಿಮೂತವಾಹನನು ಕೇವಲ ಅಂಧಶ್ರದ್ಧೆಯ ಪೂಜೆಯ ದೃಷ್ಟಿಯಿಂದ ಸರ್ಪಗಳನ್ನು ಕಾಣಲಿಲ್ಲ. ಭಗವಂತನ ಸೃಷ್ಟಿಯಲ್ಲಿ ಸರ್ಪಕ್ಕೂ ಸ್ಥಾನವಿದೆ. ಒಂದು ಸರ್ಪದ ಜೀವವಾದರೂ ತನ್ನ ತ್ಯಾಗದಿಂದ ಉಳಿಯಬಲ್ಲುದಾದರೆ ಅದು ಜಗತ್ತಿನ ಜನಕೋಟಿಯ ಮೇಲೆ ಸತ್ಪರಿಣಾಮವುಂಟುಮಾಡಲೆಂದು ತನ್ನನ್ನರ್ಪಿಸಿಕೊಂಡನು. ಇಂಥ ತ್ಯಾಗಕ್ಕೆ ಎಣೆಯುಂಟೇ?

'ಒಂದಾಣೆ ಮಾಲೆ'ಯ 231ನೇ ಪ್ರಕಟಣೆಯಾಗಿ ಈ ಮೊದಲು "ತ್ಯಾಗಶಿರೋಮಣಿ ಜಿಮೂತವಾಹನ" ಏಕಾಂಕ ನಾಟಕವೊಂದನ್ನು (ರಚಯಿತರು: ಶ್ರೀ! ಈಶ್ವರಯ್ಯ) ನಾವು ಪ್ರಕಟಿಸಿದ್ದೇವೆ. ಆ ನಾಟಕದಲ್ಲಿ 11 ಪಾತ್ರಗಳಿವೆ. ಪ್ರಸ್ತುತ ನಾಟಕದಲ್ಲಿ ಏಳು ಪಾತ್ರಗಳನ್ನು ಮಾತ್ರ ಕೊಡಲಾಗಿದೆ. ವಾಚಕರು, ಈ 279ನೇ ಪ್ರಕಟಣೆಯನ್ನೂ ಮೆಚ್ಚುವರೆಂದು ಭರವಸೆ.

**ಕುಡ್ವಿ ವಾಸುದೇವ ಶೆಣ್ಯೆ.**

# ಜೀಮೂತವಾಹನ

## (ಏಕಾಂಕ ನಾಟಕ)

ಪಾತ್ರಗಳು:—

೧. **ಜೀಮೂತವಾಹನ**—ಕಥಾನಾಯಕ.
೨. **ಮಿತ್ರಾವಸು**—ನಾಯಕನ ಭಾವಮೈದುನ.
೩. **ಶಂಖಚೂಡ**— ಗರುಡನ ಆಹಾರಾರ್ಥವಾಗಿ ನಾಗರಾಜನಿಂದ ಕಳುಹಲ್ಪಟ್ಟವನು.
೪. **ನಾಗಮ್ಮ**—ಶಂಖಚೂಡನ ತಾಯಿ.
೫. **ಗರುಡ**—ನಾಗಶತ್ರು.
೬. **ಸುನಂದ** }
೭. **ಸುಭದ್ರ** } —ಸೇವಕರು.

**ಕಥಾಸಾರ:** ನಾಗರಾಜನು ವರಸೆಯಾಗಿ ಗರುಡನಿಗೆ ಸರ್ಪಗಳನ್ನು ದಿನಕೆ ಒಂದರಂತೆ ಕಳುಹುತ್ತಿರುವಲ್ಲಿ ಇಂದು ಶಂಖಚೂಡನ ಸರದಿ ಬಂದಿತು. ಮಹಾಸತ್ವನಾದ ಜೀಮೂತವಾಹನನು ತನ್ನನ್ನು ಗರುಡನಿಗರ್ಪಿಸಿ ಶಂಖಚೂಡನನ್ನು ಉಳಿಸುವನು. ಈ ಅಮೋಘವಾದ ಪ್ರಾಣಿದಯಾಶೀಲತೆಯು ಗರುಡನಲ್ಲಿ ಪ್ರಭಾವ ಬೀರುವುದರಿಂದ ಆತನು ಅಹಿಂಸಾವ್ರತಿಯಾಗಿ ಮಾರ್ಪಡುವನು.

---

### ದೃಶ್ಯ ೧

(ತೆರೆಯಲ್ಲಿ ನಾಂದಿ)

॥ **ಶಾರದಾ ಸ್ತುತಿ** ॥

[ಧಾಟಿ: ಐ ಮಾಲಿಕ್ ತೇರೇ.........ಎಂಬಂತೆ.]

ಓ, ವಾಣೀ ಕೋಕಿಲ ವಾಣಿಯೇ ।
ದೇವೀ । ವೀಣಾಪಾಣಿಯೇ ।
ಪಾವನೆ, ಸುರವಾಣಿ! ಬೊಮ್ಮನ ರಾಣಿಯೇ
ಕಾವುದಮ್ಮಾ । ಕನ್ನಡ ಕಣ್ಮಣೀ ॥

ದೇಶಕಾಲಾತಿಗಳೆ ಮಾತೆಯೇ ।
ಭಾಷೆಗಳಿಗೇ ನೀನಧಿದೇವತೇ ।
ತೋಷದಿಂದೊಲಿದು ನೀ ಕಾಮಿತಾರ್ಥಗಳನೀ ।
ನೀ ಸದಾ ನಮ್ಮ ಕಾಯುವ ಮ್ಮ ಓಂ! ಶಾರದೇ ॥ ಓಂ ವಾಣಿ ॥

[ತೆರೆಯೇಳುವುದು. ಮಹಾರಾಜ ವಿಶ್ವಾವಸುವಿನ ಅರಮನೆ. ಜೀಮೂತ ವಾಹನ– ಮಿತ್ರಾವಸು, ಇಬ್ಬರೂ ತಾಂಬೂಲ ಹಾಕುತ್ತ ಮಾತನಾಡುತ್ತಿರುವರು. ಮಧ್ಯಾಹ್ನಾನಂತರದ ಇಳಿಹೊತ್ತು.]

ಮಿತ್ರಾವಸು: ರಾಜೇಂದ್ರಭಾವಾ! ಜೀಮೂತವಾಹನಾ! ಮೀಳೆಯು ದೆಲೆಯುನ್ನು ತಿಂದ ನಿನ್ನ ಈ ಮುಖದ ತೇಜಸ್ಸೇ ತೇಜಸ್ಸು! ಗಾಂಭೀರ್ಯವೇ ಗಾಂಭೀರ್ಯ!

ಜೀಮೂತವಾಹನ: (ತಡೆದು) ಅಯ್ಯಾ! ಮಿತ್ರಾವಸೂ! ತಡೆ, ತಡೆ! ಅಷ್ಟಕ್ಕೇ ನೀನು ನನ್ನನ್ನು ರಾಜೇಂದ್ರನೆಂದು ಗೇಲಿಮಾಡುತ್ತಿರುವೆಯಾ? ಹುಂ. ಅಲ್ಲವಾದರೆ ಅದೂ ಸರಿಯೆನ್ನು. ಆದರೆ, ನಾನು ನೀನೆನ್ನುವ ಆ ರಾಜಕೀಯದ ರಾಜನಲ್ಲ; ಈಗೀಗ ಋಷಿರಾಜನಾಗುತ್ತಿರುವೆನು. ಇನ್ನೇನು? ಗಡ್ಡ ಇಳಬಿಟ್ಟು ಕಾವಿಯುಟ್ಟುಕೊಂಡರಾಯಿತಲ್ಲ?

ಮಿತ್ರ: ನಿಜ, ನಿಜ. ಭಾವನವರು ಈಗಾಗಲೇ ತಪಸ್ಸಿನಲ್ಲಿ ಮಹಾ ಮಹಾ ಮುನಿವರ್ಯರಿಗೂ ಸವಾಲಾಗಿ ನಿಂತಿದ್ದಾರೆ. ಆದರೆ.... ಇನ್ನೂ ಅದನ್ನೇ ಮುಂದುವರಿಸಿದರೆ ಪಾಪ....(ಎಂದು ಏನೋ ಯೋಚಿಸುತ್ತಿರುವನು.)

ಜೀಮೂತ: (ಗಂಭೀರನಾಗಿ) ನೀನೇನೇ ಅನ್ನು. ಆದರೆ, ನನಗೆ ಈ ವನರಾಜ್ಯದಲ್ಲಿ ಲಭಿಸುವಷ್ಟು ಮನಶ್ಶಾಂತಿಯು ಆ ಸ್ವರಾಜ್ಯದಲ್ಲಿ ದೊರಕಲಿಲ್ಲ. ಆದ್ದರಿಂದಲೇ ನಮ್ಮ ತಂದೆ-ತಾಯಿಗಳು ವಾನಪ್ರಸ್ಥಾಶ್ರಮ ಕೈಕೊಂಡಾಗ ಅವರ ಸೇವೆ ಮಾಡಲೆಂದೇ ಬೆಂಬಿಡದೆ ಬಂದೆ. ನಮ್ಮ ವಂಶ ಪರಂಪರೆಯಿಂದ ಬಂದ ಕಲ್ಪವೃಕ್ಷವನ್ನು ಸಹ ಯಾಚಕರಿಗೆ ದಾನವಿತ್ತು ನಾಡುಬಿಟ್ಟು ಕಾಡಿಗೆ ಬಂದೆ. ಈ ಪುಣ್ಯಭೂಮಿ ಭಾರತದ ವನಪ್ರದೇಶವಾದರೋ ನಮ್ಮ ಕನಸಿನ ರಾಜ್ಯದ ತುಣುಕುಗಳೇ ಆಗಿವೆ!

ಪದ್ಯ— [ರಾಧಾಮಾಧವ ವಿನೋದ...... ಎಂಬಂತೆ]

ಆಶಾಲೋಕದ ವನಪ್ರದೇಶ
ನಾಡೇ! ನಲಿಯುವ ನೂತನ ತೋಷಾ ॥ ಪಲ್ಲ ॥

ತಾವರೆ, ಜಾಜಿ, ಮೊಲ್ಲೆ, ಗುಲಾಬಿ
ಚೆಲುವನು ಚೆಲ್ಲುವ ಅರಳಾಗಿ ||
ಒಂದೊಂದಾಗಿ ತಾ ತಲೆದೂಗಿ
ಬಾಗುವ ಸೋಗೇ ಸ್ವರ್ಗವಿಲಾಸ || ಆಶಾ ||

ನೀಲಾಕಾಶದ ಬೆಳ್ಮುಗಿಲಲ್ಲೀ
ಲೀಲೆಯೊಳಾಡುವ ಚಂದಿರನೆ
ತಾರೆಯ ಮಾಲೆ ನೀರಿನ ಮೇಲೆ
ಕಾಣುವ ನೋಟ ಅದೆ ರಸದೂಟ || ಆಶಾ ||

ಮಿತ್ರಾ! ನನ್ನ ಅಂತರಾತ್ಮವನ್ನು ಬಿಚ್ಚಿ ಹೇಳುವುದಾದರೆ— ಆ ಕಲ್ಪ ವೃಕ್ಷವೆಂದೇನು?—ನನ್ನೀ ಶರೀರವನ್ನೇ ಆದರೂ ಪರೋಪಕಾರಕ್ಕಾಗಿ ಕೈ ಎತ್ತಿಕೊಡಲು ನಿರ್ಧರಿಸಿರುವೆನು. ಆದರೆ....ಆದರೆ, ಅಂಥಾ ಪುಣ್ಯವಂತ ರಾರೂ ಇನ್ನೂ ನನ್ನೆದುರು ಬಂದಿಲ್ಲ. ಪುಣ್ಯವಶದಿಂದ ಅದೊಂದು ಶುಭ ಗಳಿಗೆಯು ಬಂದೊದಗಿದರೆ ಆ ನನ್ನ ಮನೋರಥದ ಪರಾಕಾಷ್ಠೆಯನ್ನು ಸಂತೋಷದಿಂದಲೇ ಪೂರಯಿಸುವೆನು.

ಮಿತ್ರ: ಭಾವಾ! ನನಗೇನೋ ನೀನೆಂದ ಆ....'ಯಾರೂ ಬಂದಿಲ್ಲ' ಎಂಬ ಮಾತಿನಲ್ಲಿ ನಂಬಿಕೆ ಬರುವುದಿಲ್ಲ. ಈಗ್ಗೆ ಕೆಲದಿನಗಳ ಹಿಂದೆ ಜನ ಜಂಗುಳಿಯಲ್ಲಿ ಒಂದು ವ್ಯಕ್ತಿ ಅದೇ ದಾನವನ್ನು ನಿನ್ನೊಡನೆ ಕೇಳಿದುದನ್ನು ನಾನು ಬಲ್ಲೆನು.

ಜೀಮೂತ: (ನೆನಪಾಗದವನಂತೆ) ಆಗ....ನಾನು ಒಲ್ಲೆನೆಂದೆನೆ?

ಮಿತ್ರ: ಇಲ್ಲ, ಇಲ್ಲ. ಎಲ್ಲಾದರೂ ಉಂಟೇ? ಇಲ್ಲವೆನ್ನಲೂ ಇಲ್ಲ. ಆದರೆ ಕೊಟ್ಟುದೂ ನನಗೆ ತಿಳಿದುಬಂದಿಲ್ಲ. ನೀನೀಗ ಅದನ್ನು ಮರೆತಿರ ಬಹುದೇನೋ?

ಜೀಮೂತ: ಅದಿರಲಿ. ನಿನಗೆ ಆ ವ್ಯಕ್ತಿಯು ಗುರುತಿದೆಯೆ? ಇದ್ದರೆ ನಡೆ. ಈಗಲಾದರೂ ನನ್ನ ಮರೆವೆಯ ತಪ್ಪನ್ನು ಸರಿಪಡಿಸಬಹುದು.

ಮಿತ್ರ: ಗುರುತಿಲ್ಲದೆ ಏನಾಗಿದೆ? ನಾವಿಬ್ಬರೂ ಬಹುಕಾಲದ ಒಡನಾಡಿಗಳು ಮಾತ್ರವಲ್ಲ, ನನ್ನಲ್ಲಿ ಆ ಜನಕ್ಕೆ ಸಹೋದರಪ್ರೇಮ ವಿದೆ!.................

ಜೀಮೂತ: (ಎದ್ದು, ಮಿತ್ರಾವಸುವಿನ ಕೈಹಿಡಿದೆಳೆಯುತ್ತ ಆತುರ ಪಡಿಸಿ) ಮಿತ್ರಾ! ಏಳೇಳು, ನಡೆ, ನಡೆ!

ಮಿತ್ರಾ: (ವ್ಯಂಗ್ಯವಾಗಿ ನಗುತ್ತ) ಹೂಂ. ನಡೆ, ನಡೆ ಮಲಯ ವತಿಯ ಅಂತಃಪುರಕ್ಕೆ! ಹ ಹ್ಹ ಹ್ಹ!!

ಜೀಮೂತ: (ನಗುವಿನ ರಹಸ್ಯ ತಿಳಿದು, ನಗುತ್ತಾ ಹಿಂದಿರುಗಿ ನಮಸ್ಕರಿಸಿ) ಮಹಾನುಭಾವ! ಸಾಕು, ನಿನ್ನ ಪರಿಹಾಸ. ಬಾ, ಹೋಗೋಣ. ಬಯಲು ಗಾಳಿಯಲ್ಲಿ ಅಷ್ಟು ತಿರುಗಾಡಿಕೊಂಡು ಬರೋಣ! ಬಾ.

ಮಿತ್ರಾ: ಅದೀಗ ಸರಿ. ಇಂದು ನಾವು....?....?....ಹಾಂ. ಇಂದು ನಾವು ಕಡಲ ದಡದತ್ತ ಹೋಗಿ ಬರೋಣ. ಆಗದೆ? ತುಂಬಾ ಒಳ್ಳೆಯ ತಾವದು!

ಜೀಮೂತ: ಬಾ, ಅಲ್ಲಿಗೇ ಹೋಗೋಣ. (ತೆರೆ.)

## ದೃಶ್ಯ ೨

[ಕಡಲುತೀರ. ಜೀಮೂತವಾಹನ ಮತ್ತು ಮಿತ್ರಾವಸು ಬರುತ್ತಿರುವರು.]

ಜೀಮೂತ: (ಅಭಿಮಾನದಿಂದ) ಸಮುದ್ರರಾಜನ ಗಾಂಭೀರ್ಯವು ಹೇಳಲಸದಳವಾಗಿದೆ. ಈ ನೆರೆ, ತೆರೆ, ನೊರೆ, ಮೊರೆಗಳಿಂದಾಗಿ ಇನ್ನಷ್ಟು ಗಂಭೀರವಾಗಿದೆ. ಮಿತ್ರಾ, ಇದೋ! ಈ ಕಡೆಗೆ ಅಪ್ಪಳಿಸುವ ಕಡಲತೆರೆಗಳು ಮಲಯಪರ್ವತದ ತಪ್ಪಲನ್ನೇ ಕೊರೆಯುತ್ತಿರುವಂತಿವೆ!....

ಮಿತ್ರಾ: ಭಾವಾ! ಅಲ್ಲ, ಅಲ್ಲ. ಅದು ಮಲಯಾಚಲದ ತಪ್ಪಲು ನೆಲವಲ್ಲ! ಅದು ಗರುಡನು ಕೊಂದು ತಿಂದ ಸರ್ಪಗಳ ಎಲುಬಿನ ರಾಶಿ!

ಜೀಮೂತ: ಅಯ್ಯೋ! ಇದೇಕಿಂತು ಸರ್ಪಗಳಿಗೆ ಈ ದುರವಸ್ಥೆ ಒದಗಿತು?

ಮಿತ್ರಾ: ಅದೊಂದು ದೊಡ್ಡ ಕತೆಯಾಗಿದೆ. ಗರುಡನು ಸರ್ಪಗಳ ಮೇಲಿನ ದ್ವೇಷದಿಂದ ಪ್ರತಿದಿನವೂ ಭರದಿಂದ ಪಾತಾಳಲೋಕಕ್ಕೆರಗಿ ನಾಗಗಳನ್ನು ಕೊಂದು ತಿನ್ನುತ್ತಿದ್ದನು ಮಾತ್ರವಲ್ಲ, ಆತನ ರಭಸಕ್ಕೆ ನಾಗಕನ್ನಿಕೆಯರು ಹೆದರಿ, ಅಸಂಖ್ಯಾತ ಗರ್ಭಪಾತಗಳಾಗುತ್ತಿದ್ದುವು. ಇದರಿಂದ ಹೆದರಿದ ನಾಗರಾಜನು ಗರುಡನನ್ನು ಒಡಂಬಡಿಸಿದನು....

ಜೀಮೂತ: ಏನೆಂದು? ತನ್ನನ್ನೇ ಮೊದಲು ತಿನ್ನೆಂದೆ?

ಮಿತ್ರಾ: ಹಾಗಲ್ಲ "ನಾನು ಪ್ರತಿದಿನವೂ ಒಂದೊಂದರಂತೆ ಸರ್ಪಗಳನ್ನು ನಿನಗಾಗಿ ಕಳುಹುವೆನು ನೀನದರಿಂದಲೇ ತೃಪ್ತಿಪಡುವುದಲ್ಲದೆ, ದಯವಿಟ್ಟು ಇಲ್ಲಿಗೆ ದಾಳಿಯಿಡಬಾರದ" ಎಂದು. ಗರುಡನದಕ್ಕೆ ಸಮ್ಮತಿಸಿದನು. ಅಂದಿನಿಂದ ಈ ಕಗ್ಗೊಲೆ ಇಕ್ಕೆ ತಡೆಯಿಲ್ಲದೆ ನಡೆಯುತ್ತಿದೆ!

ಜೀಮೂತ: ಛೀ! ನಾಗರಾಜನ ಜೀವನಕ್ಕೆ ಧಿಕ್ಕಾರವಿರಲಿ! ಅಯ್ಯೋ! ನಾಗರಾಜನ ಎರಡು ಸಾವಿರ ನಾಲಗೆಗಳಲ್ಲಿ ಒಂದೇ ಒಂದಾದರೂ 'ತನ್ನನ್ನು ಮೊದಲು ತಿಂದುಕೊ' ಎನ್ನಲಾರದೇ ಹೋಯಿತೆ? ನಾಚಿಕೆ! ನಾಚಿಕೆ! (ತನ್ನಲ್ಲಿ ತಾನು) ನಾನಾದರೂ ನನ್ನ ಶರೀರವನ್ನಿತ್ತು ಒಂದೇ ಒಂದು ಸರ್ಪವನ್ನಾದರೂ ಉಳಿಸಲಾಪೆನೆ?

ಸುನಂದ: (ಪ್ರವೇಶಿಸಿ, ನಮಸ್ಕರಿಸಿ) ವಿಶ್ವಾವಸು ಮಹಾರಾಜರು, ಕಾರ್ಯಾಂತರಕ್ಕಾಗಿ ಯುವರಾಜರು ಕೂಡಲೇ ಬರಬೇಕೆಂದು ಅಪ್ಪಣೆ ಮಾಡಿರುವರು.

ಮಿತ್ರಾ: (ಜೀಮೂತವಾಹನನೊಡನೆ) ಭಾವಾ! ತಂದೆಯವರು ನನ್ನನ್ನು ಅವಸರವಾಗಿ ಕರೆಯುತ್ತಿರುವುದರಿಂದ ನಾನು ಹೋಗಬೇಕಾಗಿದೆ. ನೀನೂ ಕೂಡ ಈ ಅಪಾಯದ ತವರುಮನೆಯಂತಿರುವ ಸ್ಥಳದಲ್ಲಿ ಹೆಚ್ಚು ಹೊತ್ತು ಇರದೆ ಬೇಗನೇ ಬಂದುಬಿಡು.

ಜೀಮೂತ: ಸರಿ, ಸರಿ. ಇದೋ! ಇಲ್ಲೇ ಕೊಂಚ ಹೊತ್ತಿದ್ದು, ಬಳಿಕ ನಾನೂ ಬಂದೆ. ನಡೆ.

[ಮಿತ್ರಾವಸು ಸುನಂದನೊಡನೆ ಹೋಗುವನು. ಜೀಮೂತವಾಹನನು ಸಮೀಪದ ಒಂದು ಬಂಡೆಕಲ್ಲಿನ ಮೇಲೆ ಕುಳಿತುಕೊಳ್ಳುವನು.]

ಜೀಮೂತ: ಇದ ದೀಪಾವಳಿ ಹಬ್ಬದ ಸುಸಮಯ. ಅಂಧಕಾರಮಯವಾದ ಜಗತ್ತಿಗೆ ಬೆಳಕನ್ನಿತ್ತು ಬೆಳಗುವ ಹಬ್ಬವಿದು!

ಪದ್ಯ— [ಉನ್ನೈ ಕಂಡು ನಾನಾಡ....ಎಂಬಂತೆ]

ಅಂಧಕಾರ ತೊಲಗಿಸುತ, ಜ್ಞಾನದೀಪ ಬೆಳಗಿಸುತ
ತಾಯ್ನಾಡ ತೊಳಗಿಸುವ ದೀಪಾವಳೀ ।
ಊರೂರು ಕೂಡೀ, ನೂರಾರು ಹಾಡೀ

ಮೇಲಾಟವಾಡುವುದೂ, ಅಿ........
ಮೇಲಾಟವಾಡುವುದೂ ॥
ಸಾಗರದ ನೀಲಿಮೆಯು ನೆಲೆದಪ್ಪಿ ಬಂತೋ,
ಆಗಸದ ಕಪ್ಪೆಲ್ಲ ಮೇಳವಾಯ್ತೋ,
ಅಂಧಕ ರಾಕ್ಷಸನ ಮಾಯಾ ಮಹತ್ತೋ
ತಮವಾ ಹರಿಸೀ ಬೆಳಗುತಲಿಹವೂ
ತಾರೆಗಳೆಲ್ಲಾ ಧರೆಗಿಳಿದಂತೆ
ಕನ್ನಾಡ ಹಣತೆಗಳೂ ಅಿ........
ಕನ್ನಾಡ ಹಣತೆಗಳು ॥ ಅಂಧಕಾರ........

[ತೆರೆಯಲ್ಲಿ—"ಅಯ್ಯೋ! ಮಗನೆ! ಇಂದಿನ ದಿನ ಸಾಯತಕ್ಕ ನಿನ್ನ ಮುಖವನ್ನು ನಾನೆಂತು ನೋಡುವೆನೋ? ಹಾಹಾ!"]

ಜೀಮೂ: ಅರರೆ! ಇಲ್ಲೇ ಸಮೀಪದಲ್ಲೆಲ್ಲಿಯೋ ಅಳುವಿನ ಸದ್ದು ಕೇಳುತ್ತಿರುವುದು! ಸಾಯತಕ್ಕ ಮಗನ ಮುಖವಂತೆ! ಸಾವಿನ ಕಾರಣವಾದರೂ ಏನಾಗಿರಬಹುದು? (ಸುತ್ತಲೂ ನೋಡುತ್ತ, ಕಿವಿಗೊಟ್ಟು ಕೇಳುತ್ತಿರುವನು.)

[ನಾಗಮ್ಮ ಮತ್ತು ಶಂಖಚೂಡರು ಪ್ರವೇಶಿಸುವರು. ಶಂಖಚೂಡನ ಕೈಯಲ್ಲಿ ಎರಡು ಕೆಂಪುಬಟ್ಟೆಗಳಿರುವುವು.]

ನಾಗಮ್ಮ: ಅಯ್ಯೋ! ಮಗನೆ! ಇಂದಿನ ದಿನ ಸಾಯತಕ್ಕ ನಿನ್ನ ಮುಖವನ್ನು ನಾನೆಂತು ನೋಡಲಿ? ಪುತ್ರ, ಶಂಖಚೂಡ! ನಿನ್ನ ಮುಖಚಂದ್ರನ ಅಭಾವದಿಂದ ಇಡೀ ಪಾತಾಳಲೋಕವೇ ನನ್ನ ಪಾಲಿಗೆ ಕತ್ತಲೆಯ ಮನೆಯಾಗುವುದು!

ಶಂಖಚೂಡ: ಅಮ್ಮಾ! ಅಳಬೇಡ. ವ್ಯರ್ಥವಾಗಿ ಏಕಳುವೆ? ಇದು ರಾಜಾಜ್ಞೆ! ಇದನ್ನು ನಾನು ಶಿರಸಾವಹಿಸಲೇ ಬೇಕು.

ನಾಗಮ್ಮ: (ತಬ್ಬಿ ಹಿಡಿದುಕೊಂಡು) ಇಲ್ಲ, ಇಲ್ಲ. ಮಗನೇ! ಅಂಥ ಮಾತನ್ನು ಇನ್ನೊಮ್ಮೆ ಆಡಬೇಡ. ಇದು "ರಾಜಾಜ್ಞೆ" ಎಂಬ ಮಾತಿನ ಅರ್ಥಕ್ಕೆ ಹೊಂದಿಕೆಯಿಲ್ಲದ ಬರಡು ಮಾತು. ಮುದುಕಿಯಾದ ನನ್ನನ್ನು ಬಲಿಗೊಡದೆ ಅವಿವೇಕದಿಂದ ನಿನಗೆ ಅದನ್ನು ವಿಧಿಸಿದ ರಾಜನು ರಾಜನೆ? ಸರ್ವಥಾ ಅಲ್ಲ. ಶಿವಶಿವಾ! ನನ್ನ ಕಂದನನ್ನು ರಕ್ಷಿಸುವವರಾರೂ ಇಲ್ಲವೆ?

ಜೀಮೂತ: (ಹತ್ತಿರಕ್ಕೆ ಬಂದು) ಇರುವೆನು, ಇರುವೆನು, ಇದೋ ನಾನಿರುವೆನು.

ನಾಗಮ್ಮ: (ಹೆದರಿ ನಡುಗುತ್ತ, ಶಂಖಚೂಡನನ್ನು ತನ್ನ ಸೆರಗಿನಲ್ಲಿ ಮರೆಮಾಡಿ) ಗರುಡಾ! ಇದೋ! ನಿನ್ನ ಆಹಾರವಾಗಿ ನನ್ನನ್ನು ರಾಜನು ಕಳುಹಿಸಿರುವನು

ಶಂಖ: ತಾಯಿ! ಈತನು ಗರುಡನಲ್ಲ! ದಯಾಳುವಾದ ಪುರುಷೋತ್ತಮನೊಬ್ಬನ !

ನಾಗಮ್ಮ: ಮಗನೇ! ನೂರು ವರ್ಷ ಬಾಳು! ಇದೀಗ ನಾನು ಬಹಳವಾಗಿ ಅಂಜಿಕೆಗೊಳಗಾದುದರಿಂದ ಇಡೀ ಜಗತ್ತೇ ನನ್ನ ಕಣ್ಣಿಗೆ ಗರುಡಮಯವಾಗಿ ಕಾಣುತ್ತಿರುವುದು!

ಜೀಮೂತ: ಅಮ್ಮಾ! ಅದಕ್ಕಾಗಿ ಇನ್ನು ಚಿಂತಿಸಬೇಡ. ತನ್ನನ್ನು ಗರುಡನಿಗರ್ಪಿಸಿ, ನಿನ್ನೀ ಮಗನನ್ನುಳಿಸುವುದಕ್ಕಾಗಿಯೇ ಈ ಜೀಮೂತವಾಹನನು ಬಂದಿರುವನು.

ನಾಗಮ್ಮ: ಮಗೂ! ಆ ಮಾತನ್ನು ಇನ್ನೊಮ್ಮೆ ಹೇಳು.

ಜೀಮೂತ: ತಾಯೇ! ಇನ್ನೊಮ್ಮೆ ಹೇಳುವುದರಿಂದೇನು ಫಲ? ಅದನ್ನು ಕಾರ್ಯರೂಪದಲ್ಲಿಯೇ ಮಾಡಿತೋರಿಸುವೆನು.

ಶಂಖ: ಮಹಾನುಭಾವ! ಈ ಉದಾತ್ತವಾದ ಗುಣವೇ ನಿನ್ನನ್ನು ಮಹಾತ್ಮನೆಂದು ಸಾರುತ್ತಿರುವುದು. ಆದರೆ, ನನ್ನನ್ನು ಕ್ಷಮಿಸು. ರಾಜಾಜ್ಞೆಯು ನನ್ನ ತಲೆಯ ಮೇಲಿದೆ. ಅದನ್ನು ಪೂರಯಿಸುವ ಹೊಣೆ ನನ್ನದು.

ಜೀಮೂತ: ಅಮ್ಮಾ! ನಿನ್ನ ಮಗನಿಗೆ ಸ್ವಲ್ಪ ನೀನೇ ಹೇಳು. ನನಗೆ ಅಪೂರ್ವವಾಗಿ ದೊರೆತ ಈ ಇಷ್ಟಕಾರ್ಯವನ್ನು ಈಡೇರಿಸಲು ಅವಕಾಶಕೊಡು.

ಶಂಖ: ಮಹಾತ್ಮಾ! ಇಲ್ಲ; ಖಂಡಿತವಾಗಿಯೂ ಇಲ್ಲ. (ತಾಯ ಕಡೆಗೆ ತಿರುಗಿ) ತಾಯೇ! ನೀನೀಗ ಇದೆಲ್ಲವನ್ನೂ ಮರೆತು, ನನ್ನ ಮಗನಿಂದು ರಾಜಾಜ್ಞೆಯನ್ನು ನೆರವೇರಿಸಿದ ಭಾಗ್ಯಶಾಲಿಯೆಂದು ಸಂತೋಷಪಡುತ್ತ ಮನೆಗೆ ನಡೆ. ನಾನೂ ಇದೀಗಲೇ ಹೋಗಿ, ದಕ್ಷಿಣ ಗೋಕರ್ಣ

ನಾಥನನ್ನು ಪೂಜಿಸಿಕೊಂಡು ಬಂದು ಕೆಂಪು ಬಟ್ಟೆ ಮುಸುಕಿ ವಧ್ಯಶಿಲೆಯನ್ನೇರುವೆನು. (ಇಬ್ಬರೂ ತೆರಳುವರು)

ಜೀಮೂತ: (ನಿರಾಶೆಯಿಂದ) ಹಾಯ್! ನನ್ನ ಮನೋರಥವು ಇನ್ನೇನು ಈಡೇರುತ್ತಿತ್ತು! ಆದರೆ....ಸಫಲವಾಗಲಿಲ್ಲ! ಈಗಲಾದರೊ.... ಇದಕ್ಕೇನು ಉಪಾಯವು?........

ಸುಭದ್ರ: (ಹಠಾತ್ತನೆ ಪ್ರವೇಶಿಸಿ) ಈ ಎರಡು ಕೆಂಪು ಬಟ್ಟೆಗಳು....

ಜೀಮೂತ: ಯಾರು? ಸುಭದ್ರನೆ? ಏನು?

ಸುಭದ್ರ: ಈ ಎರಡು ಕೆಂಪು ಬಟ್ಟೆಗಳು ಮಲಯವತಿಯ ಬಂಧು ವರ್ಗದವರಿಂದ ನಿಮಗಾಗಿ ಬಂದಿವೆ. ಈ ದೀಪಾವಳೀ ಹಬ್ಬದಲ್ಲಿ ಇದನ್ನು ಕೊಡುವುದು ವಾಡಿಕೆ.

ಜೀಮೂತ: ಸರಿ. ಇಲ್ಲಿ ಕೊಡು. (ಸುಭದ್ರನು ಕೊಟ್ಟು ತೆರಳುವನು.)

ಜೀಮೂತ: ನಾನು ಮಲಯವತಿಯೊಡನೆ ವಿವಾಹ ಸಂಬಂಧ ಮಾಡಿಕೊಂಡುದು ಇಂದಿಗೆ ಸಫಲವಾಯಿತು. ಕಾಲೋಚಿತವಾದ ಈ ಕೆಂಪುಬಟ್ಟೆಗಳು ನನ್ನ ಕೈಸೇರಿದುದು ಭಾಗ್ಯಾಧೀನವೇ ಸರಿ. ಅದೋ! ಅದೇನು ಬಿರುಗಾಳಿ ಬೀಸುತ್ತಿದೆ? ನಿಜ, ನಿಜ, ಬಹುಶಃ ಗರುಡನು ಬರುವ ಹೊತ್ತಾಗುತ್ತಾ ಬಂತೇನೋ? ಶಂಖಚೂಡನು ಇಲ್ಲಿಗೆ ಬಂದು ಸೇರುವ ಮೊದಲೇ ಈ ಬಟ್ಟೆಗಳನ್ನು ಮುಸುಕಿಕೊಂಡು ನಾನು ವಧ್ಯಶಿಲೆಯನ್ನೇರುವೆನು. ಇಂದಿನಂತೆ ಪರೋಪಕಾರಕ್ಕಾಗಿ ಶರೀರವನ್ನು ಸಮರ್ಪಿಸಲು ನನಗೆ ಈ ಪುಣ್ಯಭೂಮಿಯಲ್ಲಿ ಸಾವಿರ ಸಾವಿರ ಪುನರ್ಜನ್ಮಗಳನ್ನು ಭಗವಂತನು ಕರುಣಿಸಲಿ! (ಎನ್ನುತ್ತ ವಧ್ಯಶಿಲೆಯನ್ನೇರುವನು.)

ಗರುಡ: (ಭರದಿಂದ ಬಂದೆರಗಿ, ಶಿಲೆಯ ಬಳಿಯಲ್ಲಿ ಕುಳಿತು) ಆ ಜನ್ಮಶತ್ರುಗಳಾದ ನಾಗರನ್ನು ಕೊಂದು ತಿಂಬ ಲವಲವಿಕೆಯಿಂದ ನಾನೀ ತಾವಿಗೆ ಬಹುಬೇಗನೆ ಬಂದು ಸೇರಿರುವೆನು. ಹುಂ. (ಕಲ್ಲಿನ ಮೇಲಿರುವ ವ್ಯಕ್ತಿಯ ಮುಸುಕನ್ನು ತೆಗೆಯದೆ ಹಾಗೆಯೇ ಎತ್ತಿ ನೋಡಿ) ಓಹೋ! ಈತನು ಬಹಳ ಭಾರವಾಗಿದ್ದಾನೆ. ಈತನೊಬ್ಬನೇ ಇಂದು ನನ್ನ ಸರ್ಪ ಭಕ್ಷಣದಾಸೆಯನ್ನು ತೀರಿಸಬಹುದೆನ್ನುವಂತಿದೆ! ಇರಲಿ. ಹಾಗೆಯೇ ಇವ

ನನ್ನು ಮಲಯಪರ್ವತದ ಶಿಖರಕ್ಕೊಯ್ದು ಅಲ್ಲೇ ತಿನ್ನುವೆನು.
(ಎತ್ತಿಕೊಂಡು ಹಾರುವನು). (ತೆರೆ)

## ದೃಶ್ಯ ೩

[ದಾರಿ. ಶಂಖಚೂಡನು ಸಂತೋಷಗೊಂಡು ದೇವಾಲಯದಿಂದ ಮರಳಿ ವಧ್ಯಶಿಲೆಯ ಕಡೆಗಾಗಿ ಬರುತ್ತಿರುವನು.]

ಶಂಖ: ರಾಜಾಜ್ಞೆಯನ್ನು ನೆರವೇರಿಸಲೆಂದು ಗರುಡನ ಬಾಯನ್ನು ಹೊಗಲು ಹೊರಟ ನಾನು, ಭಗವಾನ್ ದಕ್ಷಿಣ ಗೋಕರ್ಣನಾಥನನ್ನು ಪೂಜಿಸಿ ಅನುಗೃಹೀತನಾದೆನು. ಇದೀಗ ಗರುಡನು ಬರುವ ಹೊತ್ತಾಗುತ್ತಿರಬಹುದು. ಬೇಗ ಬೇಗನೆ ವಧ್ಯಶಿಲೆಯನ್ನು ಸೇರುವೆನು. (ತಿರುಗುತ್ತಿರುವನು).

[ವಧ್ಯಶಿಲೆಯ ಸುತ್ತೆಲ್ಲ ನೆತ್ತರು ಸುರಿದಿರುವ ಕುರುಹನ್ನು ಕಂಡು ದಿಗ್ಭ್ರಾಂತನಾಗಿ]

ಇದೇನು, ಈ ಸಾವುಗಲ್ಲಿನ ಬಳಿಯಲ್ಲೆಲ್ಲ ನೊರೆನೆತ್ತರು ಚೆಲ್ಲಿಕೊಂಡಿದೆ! ಈ ನೋಟವೇ ಅದಾವುದೋ ಅನಿಷ್ಟಕಥೆಯನ್ನು ಹೇಳುವಂತಿದೆ! ಶಾಂತಂ ಪಾಪಂ. (ಕಿವಿ ಮುಚ್ಚಿ) ದೇವರ ದಯದಿಂದ ಅಂಥ ದೌರ್ಭಾಗ್ಯದ ಸುದ್ದಿ ಕೇಳಿಸದೇ ಇರಲಿ. (ದಿಟ್ಟಿಸಿ ನೋಡಿ ಎದೆ ಹೊಡೆದುಕೊಳ್ಳುತ್ತ) ಅಯ್ಯೋ! ನನ್ನ ಮನಸ್ಸಿನ ನೆಮ್ಮದಿಯೆಲ್ಲ ಕಲಕುತ್ತಿದೆ. ನೋಡಿದರೆ....ಇದೋ! ಈ ಕಲ್ಲಿನಿಂದ ಹೊರಟ ನೆತ್ತರಧಾರೆಯು ಮುಂದು ಮುಂದು ಸಾಗಿದೆ. ಅದಿನ್ನೂ ಹಸಿಯಾಗಿಯೇ ಕಾಣುತ್ತಿರುವುದರಿಂದ ಕೆಲವೇ ಕ್ಷಣಗಳ ಹಿಂದೆ ಇದು ನಡೆಯಿತಲ್ಲದೆ, ಬಹಳ ಹೊತ್ತಾಗಲಿಲ್ಲ; ಬಹುಶಃ ಆ ಮಹಾನುಭಾವನು ಕೊನೆಗೂ ನನ್ನೀ ಪಾಪಿಜೀವಗಳನ್ನುಳಿಸಿ ತಾನು ಗರುಡನಿಗೆ ಬಲಿಯಾದನೆಂದು ತೋರುತ್ತಿರುವುದು. (ಪರೀಕ್ಷಿಸಿ) ಬಹುಶಃವೇನು? ನಿಜವಾಗಿಯೂ ಈ ದುರ್ಘಟನೆ ನಡೆದೇ ಹೋಗಿದೆ. ಈಗೇನು ಮಾಡಲಿ? ನಿಜ. ಒಂದು ವೇಳೆ ಗರುಡನು, ಈತನು ನಾನಲ್ಲವೆಂದು ತಿಳಿದುಬಿಟ್ಟರೂ ಬಿಡಬಹುದು. ಆದ್ದರಿಂದ ಈ ನೆತ್ತರ ಧಾರೆಯನ್ನೇ ಅನುಸರಿಸಿಕೊಂಡು ಗರುಡನನ್ನು ಹಿಂಬಾಲಿಸುವೆನು. ದಯಾಮಯನೆ! ನನ್ನೀ ಕಣ್ಣುಗಳು, ಕುಶಲಿಯಾದ ನಿರಾಮಯನಾದ ಜೀಮೂತ

ವಾಹನನನ್ನೇ ಕಾಣುವಂತೆ ಕರುಣಿಸು! (ನಡೆಯುತ್ತಿರುವನು. ಬೇಸರ ಗೊಂಡು) ಧೂರ್ತ ಶಂಖಚೂಡ! ನೀನೇನು ಮಾಡಿದೆ? ಸಾವಿಗೆ ಹೆದರಿ ಜೀವಗಳ್ಳನಾಗಿ ನೆಪಹೂಡಿ ಗುಡಿಗೆ ಹೋದೆಯಾ? ನಿರಪರಾಧಿಯಾದ ಆ ಮಹಾಸತ್ವನನ್ನು ಬಲಿಗೊಟ್ಟೆಯಾ? (ತಲೆಗೆ ಹೊಡೆದುಕೊಳ್ಳುತ್ತ) ಹಾಯ್! ನಾನಿಂದು ನನ್ನ ಜೀವನದಲ್ಲಿ ಏನುತಾನೇ ಸಾಧಿಸಿದಂತಾಯಿತು? ಇಲ್ಲ; ಸೂಜಿಮೊನೆಯಷ್ಟೂ ಇಲ್ಲ! (ಪದ್ಯ).

[ಜರಾ ಸಾವರ್‌ನೇ ತೋ ಮೇರಾ...... ಎಂಬಂತೆ]

ನಾಗರಾಜಾಜ್ಞೆ ಗೈಯದಾದೆನೋ
ಈಗ ನಾನಿಂತು ಮೋಸಹೋದೆನೋ
ನನ್ನ ದುರ್ದೈವವೀರೀತಿ ಮಿಂಚಿತೇ
ಪುಣ್ಯಮೂರ್ತಿಗೆ ಸಾವು ಹೊಂಚಿತೇ ॥
ಹಿಂದಡಿಯಿಡುವಾ ಹೇಡಿಯ ತೆರದಿ
ನಿಷ್ಫಲ ಜೀವಿಯು ನಾನಾದೆ ।
ನೀರ್ಮುಗಿಲಂತೆ ಅನ್ಯರಿಗಾಗಿ
ಜೀವನ ದಾನಿಯು ನೀನಾದೆ ।
ಗರುಡ! ನಿನ್ನಂಥ ನಿರ್ದಯರಿಲ್ಲವೋ,
ಪುರುಷರತ್ನವ ತಿಂಬುದು ಸಲ್ಲವೋ
ನನ್ನ ದುರ್ದೈವವೀರೀತಿ ಮಿಂಚಿತೇ
ಪುಣ್ಯಮೂರ್ತಿಗೆ ಸಾವು ಹೊಂಚಿತೇ ॥ ನಾಗರಾಜಾ ॥
[ಹಾಡುತ್ತಾ ಹೋಗುವನು]          ತೆರೆ.

## ದೃಶ್ಯ ೪

[ಮಲಯಪರ್ವತದ ತುದಿಯ ಬಂಡೆಯೊಂದರ ಮೇಲೆ ಗರುಡನು ಜೀಮೂತವಾಹನನನ್ನು ಕುಕ್ಕಿ ತಿನ್ನುತ್ತಿರುವನು. ತಿನ್ನುತ್ತಿರುವಂತೆ ಆಶ್ಚರ್ಯಗೊಂಡು ದೂರಸರಿದು ನಿಲ್ಲುವನು.]

ಗರುಡ: (ತನ್ನಲ್ಲಿ ತಾನು) ನಾನೀತನಕ ಎಷ್ಟೋ ಹೆಬ್ಬಾವುಗಳನ್ನು ತಿಂದಿರುವೆನಾದರೂ ಈ ದಿನದಂಥ ವಿಚಿತ್ರವನ್ನು ಕಾಣಲಿಲ್ಲ. ನಾನು ಕೊಕ್ಕಿನಿಂದ ಕುಕ್ಕುತ್ತಿರುವಂತೆಯೇ ಈತನ ಮೈಯಲ್ಲಿ ರೋಮಾಂಚನ

ವಾಗುತ್ತಿದೆಯಲ್ಲದೆ, ಇವನಲ್ಲಿ ವೇದನೆಯು ಲವಲೇಶವನ್ನೂ ಕಾಣೆನು. ಆದ್ದರಿಂದ ಈತನನ್ನು ತಿನ್ನದೆ 'ನೀನಾರೆಂ'ದು ಕೇಳಿ ನೋಡುವೆನು. (ಪ್ರಕಾಶವಾಗಿ) ಮಹಾಪುರುಷನೆ! ನಿನ್ನಲ್ಲಿರುವ ಉದಾತ್ತ ಗುಣಗಳಿಂದ ಸಂದೇಹಕ್ಕೊಳಗಾದ ನಾನು ನೀನಾರೆಂದು ತಿಳಿಯಲೆಳಸುವೆನು.

ಜೀಮೂತ: ಅಯ್ಯಾ ಗರುಡನೆ! ನೀನೀಗ ಅತಿಯಾದ ಹಸಿವೆಯು ಕಾಟಕ್ಕೊಳಗಾಗಿರುವಿ. ವಿವರ ಕೇಳುವ ತಾಳ್ಮೆಯು ನಿನ್ನಲ್ಲಿಲ್ಲ. ಆದ್ದರಿಂದ ನೀನು ಮೊದಲು ನನ್ನನ್ನು ತಿಂದು ನಿನ್ನ ಹಸಿವೆಯನ್ನು ಹಿಂಗಿಸಿಕೊ. ಇದೋ! ನನ್ನ ನಾಡಿಗಳಲ್ಲಿ ನೊರೆನೆತ್ತರು ಹರಿಯುತ್ತಿರುವುದು! ಅಂಗಾಂಗಗಳಲ್ಲಿ ಸಾಕಷ್ಟು ಮಾಂಸವೂ ತುಂಬಿಕೊಂಡಿದೆ! ಬೇಕಾದುದನ್ನು ಬೇಕೆಂಬಷ್ಟು ತಿನ್ನು. ಬಳಿಕ ಕೇಳುವೆಯಂತೆ!

ಗರುಡ: (ತನ್ನಲ್ಲಿ) ಆಹಾ! ಇಂಥ ಕಠಿಣ ಪರಿಸ್ಥಿತಿಯಲ್ಲಿಯೂ ಎಷ್ಟೊಂದು ಉದಾತ್ತವಾಗಿ ನುಡಿಯುತ್ತಿರುವನು! ಖಂಡಿತವಾಗಿಯೂ ಈತನೊಬ್ಬ ಮಹಾತ್ಮನಿರಬೇಕು. ತಿಳಿಗೇಡಿತನದಿಂದ ನಾನು ಮೋಸಹೋದೆನು. ಇರಲಿ. ಈಗಲಾದರೂ ಈತನೊಡನೆ ನನ್ನ ತಪ್ಪನ್ನು ಮನ್ನಿಸೆಂದು ಬೇಡಿಕೊಳ್ಳುವೆನು. (ಪ್ರಕಾಶಂ)ಮಹಾನುಭಾವನೆ! ನಾನು ತಿಳಿಯದೆ ಮಾಡಿದ ಈ ಮಹಾಪರಾಧವನ್ನು ಮನ್ನಿಸು. (ಕೈಜೋಡಿಸುವನು.)

[ಅದೇ ಹೊತ್ತಿಗೆ ಶಂಖಚೂಡನು ಕೆಂಪುಬಟ್ಟೆ ಮುಸುಕಿಕೊಂಡು ತ್ವರಿತವಾಗಿ ಪ್ರವೇಶಿಸುವನು.]

ಶಂಖಚೂಡ: ಹಾ, ಹಾ! ಮಹಾಪರಾಧ! ಗರುಡಾ! ತೆಗೆ, ತೆಗೆ! ಈತನು ನಾಗನಲ್ಲ. ನಿನ್ನ ಆಹಾರಾರ್ಥವಾಗಿ ವಾಸುಕಿಯು ಕಳುಹಿರುವುದು ನನ್ನನ್ನಲ್ಲದೆ ಇವನನ್ನಲ್ಲ. ತಿಳಿಗೇಡಿತನದಿಂದ ನೀನು ಮಹಾಪರಾಧವನ್ನೆ ಮಾಡಿರುವೆ!

ಗರುಡ: (ಇಬ್ಬರನ್ನೂ ನೋಡಿ) ನಿಮ್ಮಿಬ್ಬರಲ್ಲಿಯೂ ವಧ್ಯ ಚಿಹ್ನೆಯಾದ ಕೆಂಪುಬಟ್ಟೆಗಳಿವೆ. ಆದ್ದರಿಂದ ಯಾರುಯಾರೆಂದು ಇನ್ನೂ ನಾನು ತಿಳಿಯಲಾರೆನು.

ಶಂಖ: ನಿನ್ನೀ ಸಂದೇಹಕ್ಕೆ ಇಲ್ಲಿ ಎಡೆಯೇ ಇಲ್ಲ. ಏಕೆಂದರೆ, ನೋಡು, ನನ್ನೀ ತಲೆಯಲ್ಲಿ ಹೆಡೆಗಳೂ, ಬಾಯಲ್ಲಿ ಎರಡು ನಾಲಗೆಗಳೂ ಸ್ಪಷ್ಟವಾಗಿ ಕಾಣುತ್ತಿವೆಯಲ್ಲವೆ?

ಗರುಡ: ನಿಜ. ಆದರೆ, ನಾನೀಗ ಯಾರನ್ನು ಕೊಂದೆನು?

ಶಂಖ: ಮೂರುಲೋಕದ ರತ್ನವಾದ ಜೀಮೂತವಾಹನನನ್ನು ಕೊಂದಿರುವೆ!

ಗರುಡ: ಅಷ್ಟದಿಕ್ಕುಗಳಲ್ಲಿಯೂ ಹಬ್ಬಿದ ಕೀರ್ತಿವಂತನಾದ ವಿದ್ಯಾಧರ ಚಕ್ರವರ್ತಿ ಜೀಮೂತವಾಹನನೇ ಇವನು? ಪೂಜ್ಯ ಜೀಮೂತವಾಹನನನ್ನು ಬ್ರಹ್ಮಾಂಡದ ಮೂಲೆಮೂಲೆಯಲ್ಲಿಯೂ ಜನರು ಕೊಂಡಾಡುತ್ತಿರುವುದನ್ನು ಪದೇ ಪದೇ ಕೇಳುತ್ತಿರುವೆನು. ಅಯ್ಯೋ! ನಾನೆಂಥಾ ಪಾಪಕರ್ಮವನ್ನು ಮಾಡಿದೆ! (ತಲೆಬಾಗಿ ಚಿಂತಿಸುವನು.)

ಶಂಖ: (ಜೀಮೂತವಾಹನನ ಕಾಲಮೇಲೆ ಬಿದ್ದು) ಕರುಣಾಮೂರ್ತಿಯೇ! ಈ ಪಾಪಿ ಶಂಖಚೂಡನನ್ನು ಮನ್ನಿಸು. ನನ್ನ ಪ್ರಮಾದದಿಂದ ಮೂರುಲೋಕದ ರತ್ನವೊಂದು ನಾಮಾವಶೇಷವಾಯಿತು. ನಾನಿನ್ನೂ ಜೀವಂತ ಉಳಿದೆನು. (ದುಃಖಿಸುವನು.)

ಜೀಮೂತ: ಮಿತ್ರಾ, ಶಂಖಚೂಡ! ನೀನೆಂದಿಗೂ ಹೀಗೆ ತಿಳಿಯಬಾರದು. ಇದರಲ್ಲಿ ನೀನು ಮಾಡಿದ ಪ್ರಮಾದವೇನಿದೆ? ನನ್ನ ಹೆಚ್ಚುಗಾರಿಕೆಯೇನಿದೆ? ನನ್ನ ಮನೋಗತವಾದ ಬಯಕೆಯನ್ನು ಹೃತ್ಪೂರ್ವಕವಾಗಿ ನೆರವೇರಿಸಿರುವೆನಷ್ಟೆ.

ಶಂಖ: ನಿನ್ನೀ ಋಣವನ್ನು ನೂರು ಜನ್ಮಗಳಲ್ಲಿಯೂ ನಾನು ತೀರಿಸಲಾರೆನು.

ಗರುಡ: ಅಕಟಕಟಾ! ನನ್ನೀ ಮಹಾಪರಾಧಕ್ಕೆ ಪರಿಹಾರವೇ ಇಲ್ಲವೇ? (ವಿಕಟವಾಗಿ) ಇದೆ, ಇದೆ. ಆತ್ಮಹತ್ಯೆಯಿಂದ ಈ ಪಾಪಿ ಜನ್ಮವನ್ನು ಮುಗಿಸುವುದೇ ಇದಕ್ಕೆ ಪರಿಹಾರ! (ಎದ್ದು) ಇದೋ! ಬಳಿಯಲ್ಲೇ ಇರುವ ಜಲನಿಧಿಯ ವಡಬಾಗ್ನಿಯ ದಳ್ಳುರಿಯಲ್ಲಿ ಬಿದ್ದು ಪ್ರಾಣಬಿಡುವೆನು. (ಮುಂದಡಿಯಿಡುವನು.)

ಜೀಮೂತ: ನಿಲ್ಲು, ನಿಲ್ಲು. ಗರುಡನೇ! ತಡೆ ತಡೆ. ಆತ್ಮಹತ್ಯೆಗೆ ಮುಂದಾಗಬೇಡ. ಒಂದು ಪಾಪವನ್ನು ಅಳಿಸಲು ಇನ್ನೊಂದು ಮಹಾಪಾಪವನ್ನು ಮಾಡುವೆಯಾ? ಆತ್ಮಹತ್ಯೆಯಿಂದ ಈ ಪಾಪ ನೀಗದು.

ಗರುಡ: (ಬಳಿಗೆ ಬಂದು) ಮಹಾತ್ಮಾ! ನಾನೀ ಪಾಪಕೂಪದಿಂದ ಮೇಲೇಳುವ ದಾರಿಯನ್ನು ಉಪದೇಶಿಸಿದರೆ ಅಂತೆಯೇ ನಡೆದುಕೊಳ್ಳು

ವೆನು. ಹೇಗಾದರೂ ಮಾಡಿ ನನ್ನನ್ನು ನರಕದಿಂದ ಪಾರುಗೊಳಿಸು. (ಕೈಮುಗಿದು ಬೇಡುವನು)

ಜೀಮೂತ: (ನೋವಿನಿಂದ ನರಳುವ ದನಿಯಲ್ಲಿ) ಮಾಡಿದ ತಪ್ಪಿಗೆ ಪಶ್ಚಾತ್ತಾಪವೊಂದೇ ಪರಿಹಾರ. ಆದ್ದರಿಂದ ಇಂದಿನಿಂದ ಪ್ರಾಣಿಹಿಂಸೆಯನ್ನು ಖಂಡಿತವಾಗಿ ಮಾಡಬೇಡ. ಈ ಮೊದಲು ಮಾಡಿದ ಜೀವಹತ್ಯೆಗಳಿಗಾಗಿ ಅಷ್ಟೇ ಪಶ್ಚಾತ್ತಾಪಪಡು. ಈ ಜಗತ್ತನ್ನು ದಯಾದೃಷ್ಟಿಯಿಂದ ಕಾಣು. ಈ ಅಹಿಂಸಾವ್ರತದಿಂದ ನೀನು ಪುನೀತನಾಗುವುದಲ್ಲದೆ ಮುಂದೆ ಕಲ್ಯಾಣಹೊಂದುವೆ.

ಗರುಡ: ಮಹಾನುಭಾವಾ! ಇದೀಗ ನನ್ನ ಮನಸ್ಸಿಗೆ ತಿಳಿವುಂಟಾಯಿತು. ನನ್ನ ಹೃದಯದ ಕತ್ತಲುಕೋಣೆಯಲ್ಲಿ ನೀನು ಸ್ನೇಹಮಯ ನಂದಾದೀಪವನ್ನು ಬೆಳಗಿರುವೆ. (ದೃಢನಿಶ್ಚಯದಲ್ಲಿ) ಈ ಗಳಿಗೆಯಿಂದಲೇ ನೀನೆಂದಂತೆ ನಡೆಯುವೆನು. ಇದೇ ನನ್ನ ಹೃದಯಸಾಕ್ಷಿಯಾದ ಪ್ರತಿಜ್ಞೆ.

ಜೀಮೂತ: ಗೆಳೆಯಾ! ಇದು ನನಗೆ ಅತ್ಯಂತ ಸಂತೋಷಕರವಾದ ಮಾತಾಗಿದೆ. ಅಯ್ಯಾ, ಮಿತ್ರರೆ! ಗರುಡ—ಶಂಖಚೂಡರೆ! ನೀವಿಬ್ಬರೂ ನನ್ನನ್ನೊಮ್ಮೆ ಬಿಗಿಯಾಗಿ ಆಲಿಂಗಿಸಿರಿ! (ಸಂತೋಷಾತಿರೇಕದಿಂದ ಇಬ್ಬರೂ ಆಲಿಂಗಿಸುವರು.)

ಜೀಮೂತ: (ಗಾಯದ ನೋವು ತಡೆಯಲಾರದೆ) ಅಮ್ಮಾ! ಅಯ್ಯಯ್ಯೋ! ನನ್ನ ಅಂಗಾಂಗಗಳಲ್ಲಿ ಸಾವಿರ ಚೇಳುಗಳು ಕಡಿದಂತಾಗುತ್ತಿದೆ! (ಸ್ವರ ಬದಲಿಸಿ) ನಿಜ. ನಿಜ. ನಾನೇಕೆ ಇನ್ನು ಇದಕ್ಕಾಗಿ ಚಿಂತಿಸಲಿ? ಈ ನರಳಾಟದಿಂದಾದರೂ ಏನು ಪ್ರಯೋಜನ? ಆದ್ದರಿಂದ ಇಂದಿನಂತೆ ಪರೋಪಕಾರಕ್ಕಾಗಿ ಶರೀರವನ್ನು ಸಮರ್ಪಿಸಲು ನನಗೆ ಈ ಪುಣ್ಯಭೂಮಿಯಲ್ಲಿ............ಸಾವಿರ ಸಾವಿರ............ಪುನರ್ಜನ್ಮಗಳನ್ನು........ ಭಗವಂತನು ಕರುಣಿಸಲಿ!........ಭಗ........ವಂತ........ನ...............

(ಧೊಪ್ಪನೆ ನೆಲಕ್ಕೆ ಬೀಳುವನು.)

[ಹಿನ್ನೆಲೆಯಲ್ಲಿ ಶೋಕವಾದ್ಯಧ್ವನಿ.]

**ಭದ್ರಂ ಶುಭಂ ಮಂಗಳಂ! ಶ್ರೀ.**



Edited, Printed & Published by K. V. Shenoy
at The Prabhat Printers, Ltd., Mangalore.